

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 68
ಸದಸ್ಯರ ಹೆಸರು : ಶ್ರೀ ಎನ್.ಅಪ್ಪಾಜಿಗೌಡ
ಉತ್ತರಿಸಬೇಕಾದ ದಿನಾಂಕ : 01-02-2021
ಉತ್ತರಿಸುವ ಸಚಿವರು : ಮಾನ್ಯ ಸಮಾಜ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2020-21ನೇ ಸಾಲಿನಲ್ಲಿ ಕೋವಿಡ್-19 ರ ಹಿನ್ನೆಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಡೆಯುತ್ತಿರುವ ವಸತಿ ಶಾಲೆಗಳಿಗೆ ಹೊಸದಾಗಿ 6ನೇ ತರಗತಿಗೆ ದಾಖಲಾತಿ ಸಂಬಂಧಿಸಿದಂತೆ ಆನ್ ಲೈನ್ ಮುಖಾಂತರ ಅರ್ಜಿ ಆಹ್ವಾನಿಸಲಾಗಿದೆಯೇ; ಆಹ್ವಾನಿಸಿದ್ದಲ್ಲಿ, ಮಂಡ್ಯ ಜಿಲ್ಲೆಯಲ್ಲಿ ಎಷ್ಟು ಮಕ್ಕಳು ಅರ್ಜಿ ಸಲ್ಲಿಸಿದ್ದಾರೆ; ಹಾಗೂ ಅಂತಿಮವಾಗಿ ವಸತಿ ಶಾಲೆಗೆ ಆಯ್ಕೆಯಾದ ಮಕ್ಕಳ ವಿವರ ನೀಡುವುದು; | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ನಡೆಸಲ್ಪಡುತ್ತಿರುವ ವಸತಿ ಶಾಲೆಗಳಿಗೆ ಹೊಸದಾಗಿ 6ನೇ ತರಗತಿ ದಾಖಲಾತಿಗೆ ಆನ್ ಲೈನ್ ಮುಖಾಂತರ ಅರ್ಜಿ ಆಹ್ವಾನಿಸಲಾಗಿದೆ. ಮಂಡ್ಯ ಜಿಲ್ಲೆಯಲ್ಲಿ 3068 ಮಕ್ಕಳು ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಕೋವಿಡ್-19 ರ ಹಿನ್ನೆಲೆಯಲ್ಲಿ ದಾಖಲಾತಿ ಪ್ರಕ್ರಿಯೆ ವಿಳಂಬವಾಗಿದ್ದು, ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ತಾತ್ಕಲಿಕವಾಗಿ ದಿನಾಂಕ:24.02.2021 ರಂದು ಪ್ರವೇಶ ಪರೀಕ್ಷೆ ನಡೆಸಲು ಸಿದ್ಧತೆ ಮಾಡಿಕೊಂಡಿರುತ್ತದೆ. |
| ಆ) | 6 ರಿಂದ 12ನೇ ತರಗತಿವರೆಗೆ 2020-21 ನೇ ಸಾಲಿನಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ ಆನ್‌ಲೈನ್ ಅಥವಾ ಆಪ್‌ಲೈನ್ ತರಗತಿಗಳನ್ನು ಅಥವಾ ವಿದ್ಯಾಗಮದಂತಹ ಯೋಜನೆಯನ್ನು ಪ್ರಾರಂಭ ಮಾಡಿದೆಯೇ; (ವಿವರ ನೀಡುವುದು) | ಸಂಘದ ಅಧೀನದಲ್ಲಿ 826 ವಸತಿ ಶಾಲೆ/ಕಾಲೇಜುಗಳು ಕಾರ್ಯನಿರ್ವಹಿಸುತ್ತಿವೆ. 6 ರಿಂದ 12 ನೇ ತರಗತಿಯವರೆಗೆ ವಸತಿಯುತ ಶಿಕ್ಷಣದೊಂದಿಗೆ ವ್ಯಾಸಂಗ ಮಾಡಲು ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಸರ್ಕಾರದ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ಮಾರ್ಗಸೂಚಿಗಳನ್ವಯ 10 ನೇ ತರಗತಿಗೆ ಶೇ. 92 ಹಾಗೂ 12ನೇ ತರಗತಿಗೆ ಶೇ.92.19 ವಿದ್ಯಾರ್ಥಿಗಳು ವಸತಿ ಶಾಲೆ/ಕಾಲೇಜುಗಳಲ್ಲಿ ಭೌತಿಕವಾಗಿ ಹಾಜರಾಗಿ ವ್ಯಾಸಂಗ ಮಾಡುತ್ತಿದ್ದಾರೆ.<br><br>7,8,9 ಮತ್ತು 11ನೇ ತರಗತಿಯ ವಿದ್ಯಾರ್ಥಿಗಳಿಗೆ "ವಿದ್ಯಾಗಮ" ನಿರಂತರ ಕಲಿಕಾ ಕಾರ್ಯಕ್ರಮಗಳನ್ನು ವಸತಿ ಶಾಲೆಗಳಲ್ಲಿ ಅನುಷ್ಠಾನಗೊಳಿಸಲಾಗಿದ್ದು, ಆನ್‌ಲೈನ್/ಆಫ್‌ಲೈನ್ ತರಗತಿಗಳ ಮೂಲಕ ಹಾಗೂ ಮಾರ್ಗದರ್ಶಿ ಶಿಕ್ಷಕರ ಮೂಲಕ ಶೈಕ್ಷಣಿಕ ಬೋಧನಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br><br>ಅಲ್ಲದೇ ಕೇಂದ್ರ ಕಛೇರಿ Studio ಮೂಲಕ ನುರಿತ ಸಂಪನ್ಮೂಲ ವ್ಯಕ್ತಿಗಳಿಂದ ಬೋಧನೆ Live Stream ಮಾಡಲಾಗುತ್ತಿದ್ದು, ಈ ಪಾಠಗಳು KREIS Academic Mouth Youtube Channel ನಲ್ಲಿ 27000 ಕ್ಕಿಂತಲೂ ಅಧಿಕ ಸಬ್‌ಸ್ಕ್ರೈಬರ್‌ಗಳನ್ನು ಹೊಂದಿರುತ್ತಾರೆ ಹಾಗೂ ಸದಾ ಕಾಲ ವಿದ್ಯಾರ್ಥಿಗಳು ಡೌನ್‌ಲೋಡ್ ಮಾಡಿಕೊಳ್ಳಲು ಅವಕಾಶವಿದ್ದು ಇದರಿಂದ ಶಿಕ್ಷಕರು/ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ. ಒಟ್ಟಾರೆಯಾಗಿ ಶೇ.60 ವಿದ್ಯಾರ್ಥಿಗಳು ಇವೆಲ್ಲವುಗಳ ಸದುಪಯೋಗ ಪಡಿಸಿಕೊಂಡಿರುತ್ತಾರೆ. |

| | | |
|---|---|---|
| ಇ) | ಸದರಿ ವಸತಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಾಯಂ ಮತ್ತು ತಾತ್ಕಾಲಿಕ ನೌಕರರಿಗೆ ಇಲಾಖೆ ಯಾವ ಕಾರ್ಯ ಚಟುವಟಿಕೆಗಳನ್ನು ಹಂಚಿಕೆ ಮಾಡಿದೆ; (ವಿವರ ನೀಡುವುದು) | ವಸತಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಾಯಂ ಮತ್ತು ತಾತ್ಕಾಲಿಕ ನೌಕರರಿಗೆ ಹಂಚಿಕೆ ಮಾಡಿರುವ ಚಟುವಟಿಕೆಗಳ ವಿವರ ಅನುಬಂಧ-01 ನೀಡಲಾಗಿದೆ. |
| ಈ) | ತಾತ್ಕಾಲಿಕ ನೌಕರರಿಗೆ ಕೋವಿಡ್-19ರ ಸಂದರ್ಭದಲ್ಲಿ ವೇತನ ಪಾವತಿ ಮಾಡಲಾಗುತ್ತಿದೆಯೇ; ಪಾವತಿ ಮಾಡದಿದ್ದಲ್ಲಿ ಅವರ ಕುಟುಂಬ ನಿರ್ವಹಣೆಗೆ ಸರ್ಕಾರ ಯಾವ ಕ್ರಮ ಕೈಗೊಳ್ಳಲು ಮುಂದಾಗಿದೆ; (ವಿವರ ನೀಡುವುದು) | ಸಂಘದ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊರಸಂಪನ್ಮೂಲ ಶಿಕ್ಷಕರು, ಅತಿಥಿ ಶಿಕ್ಷಕರು ಹಾಗೂ ಬೋಧಕೇತರ ಸಿಬ್ಬಂದಿಗಳು ಕ್ವಾರಂಟೇನ್/ ನಿರಾಶ್ರಿತರ ಕೇಂದ್ರಗಳಲ್ಲಿ ಕರ್ತವ್ಯ ನಿರ್ವಹಿಸಿದ ಹೊರಸಂಪನ್ಮೂಲ ಸಿಬ್ಬಂದಿಗಳಿಗೆ ನಿಯಮಾನುಸಾರ ವೇತನ ಪಾವತಿ ಮಾಡಲಾಗಿದೆ.<br><br>ಜೂನ್-2020 ರಿಂದ ಹೊರ ಸಂಪನ್ಮೂಲ ಶಿಕ್ಷಕರು/ಅತಿಥಿ ಶಿಕ್ಷಕರು ಹಾಗೂ ಬೋಧಕೇತರ ಸಿಬ್ಬಂದಿಗಳಿಗೆ ವೇತನ ಪಾವತಿಸಲು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿ, ಶಾಲೆಗಳು/ ಕಾಲೇಜುಗಳು/ ವಸತಿ ನಿಲಯಗಳನ್ನು ಪೂರ್ಣವಾಗಿ ತೆರೆದ ನಂತರ ಕರ್ತವ್ಯ ನಿರ್ವಹಿಸುವ ಅಂತಹ ಹೊರಸಂಪನ್ಮೂಲ ಸಿಬ್ಬಂದಿಗೆ ವೇತನ ಪಾವತಿಸಲು ಪರಿಗಣಿಸಲು ಆರ್ಥಿಕ ಇಲಾಖೆಯು ತಿಳಿಸಿರುತ್ತದೆ. ಆದಾಗ್ಯೂ ಜೂನ್-20 ರಿಂದ ಅಕ್ಟೋಬರ್-2020 ರ ವರೆಗೆ ಎಲ್ಲಾ ಹೊರಸಂಪನ್ಮೂಲ/ಅತಿಥಿ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ವೇತನ ಪಾವತಿಸಲು ಮತ್ತೊಮ್ಮೆ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ.<br><br>ದಿನಾಂಕ: 12.10.2020 ರ ಸರ್ಕಾದ ಅಪರ ಮುಖ್ಯಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ತೀರ್ಮಾನದಂತೆ, ಸದರಿ ಹೊರಸಂಪನ್ಮೂಲ ಶಿಕ್ಷಕರು/ಅತಿಥಿ ಶಿಕ್ಷಕರು ಹಾಗೂ ಬೋಧಕೇತರ ಸಿಬ್ಬಂದಿಯನ್ನು ಜಿಲ್ಲಾಡಳಿತದ ವತಿಯಿಂದ ಕೋವಿಡ್-19 ನಿರ್ವಹಣೆ ಹಾಗೂ ಇನ್ನಿತರೆ ಸರ್ಕಾರಿ ಕೆಲಸಗಳ ನಿರ್ವಹಣೆಗೆ ಬಳಸಿಕೊಂಡು, ವರದಿಯನ್ನು ನೀಡಿದಲ್ಲಿ ಸದರಿ ನೌಕರಿಗೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ವೇತನ ಪಾವತಿಸಲು ಕ್ರಮವಹಿಸಲಾಗುವುದೆಂದು ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳಿಂದ ಪತ್ರಿಸಲಾಗಿರುತ್ತದೆ.<br><br>ನವೆಂಬರ್-2020 ಮಾಹೆಯಿಂದ ಸಂಘದ ವ್ಯಾಪ್ತಿಯಲ್ಲಿನ ವಸತಿ ಶಾಲೆ/ಕಾಲೇಜುಗಳಿಗೆ ಹೊರ ಸಂಪನ್ಮೂಲ ಶಿಕ್ಷಕರು/ಅತಿಥಿ ಶಿಕ್ಷಕರು/ಅತಿಥಿ ಉಪನ್ಯಾಸಕರು ಹಾಗೂ ಬೋಧಕೇತರ ಸಿಬ್ಬಂದಿಗಳ ಸೇವೆಯನ್ನು ಪಡೆದು ವೇತನ ಪಾವತಿಸಲಾಗುತ್ತಿದೆ. |

| | | |
|---|---|---|
| ಊ) | ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಿರ್ವಹಣೆಯಲ್ಲಿರುವ ಮೆಟ್ರಿಕ್ ನಂತರದ ವಸತಿ ನಿಲಯಗಳಲ್ಲಿ 2020-21ನೇ ಸಾಲಿನಲ್ಲಿ ಪದವಿ ಶಿಕ್ಷಣ ಪ್ರಾರಂಭವಾದ ನಂತರ ಮಕ್ಕಳನ್ನು ವಸತಿ ನಿಲಯಕ್ಕೆ ದಾಖಲು ಮಾಡಿಕೊಳ್ಳಲಾಗಿದೆಯೇ; ಆಗಿದ್ದಲ್ಲಿ, ಎಷ್ಟು ಮಕ್ಕಳು ದಾಖಲಾಗಿದ್ದಾರೆ; ಪ್ರಸ್ತುತ ಕೋವಿಡ್ ಪರಿಸ್ಥಿತಿಯಲ್ಲಿ ಯಾವ ಮಂಜಾಗ್ರತೆ ಕ್ರಮ ಕೈಗೊಳ್ಳಲಾಗಿದೆ? (ವಿವರ ನೀಡುವುದು) | ಉನ್ನತ ಶಿಕ್ಷಣ ಇಲಾಖೆಯ ಆದೇಶ ದಿನಾಂಕ:09-11-2020 ರಂತೆ ದಿನಾಂಕ:17.11.2020 ರಿಂದ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯ/ ಖಾಸಗಿ ವಿಶ್ವವಿದ್ಯಾಲಯ/ ಸರ್ಕಾರಿ/ ತಾಂತ್ರಿಕ/ ಡಿಪ್ಲೋಮೋ/ ಅನುದಾನ/ ಅನುದಾನ ರಹಿತ ಕಾಲೇಜುಗಳನ್ನು ಪ್ರಾರಂಭಿಸಲು ಆದೇಶಿಸಲಾಗಿದೆ. ಅದರಂತೆ ದಿನಾಂಕ:11.11.2020 ರಂದು ಇಲಾಖೆಯ ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಆದೇಶಿಸಲಾಗಿದ್ದು, ಈವರೆವಿಗೂ ಪರಿಶಿಷ್ಟ ಜಾತಿಯ 25,068 ಮತ್ತು ಪರಿಶಿಷ್ಟ ಪಂಗಡದ 5888 ವಿದ್ಯಾರ್ಥಿಗಳು ದಾಖಲಾಗಿರುತ್ತಾರೆ. ಶಿಕ್ಷಣ ಇಲಾಖೆಯಿಂದ ಹೊರಡಿಸಲಾದ ಮಾರ್ಗಸೂಚಿಗಳು ಹಾಗೂ ಇಲಾಖೆಯಿಂದ ಹೊರಡಿಸಲಾದ ಎಸ್.ಒ.ಪಿ ಪ್ರಕಾರ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ. |

ಸಂಖ್ಯೆ: ಸಕಇ 16 ಮೊದೇಶಾ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

ಅನುಬಂಧ-1 (ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 68)

ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು

ಸಂಘದ ಅಧೀನದ ವಸತಿ ಶಾಲೆ/ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ಬೋಧಕೇತರ ಸಿಬ್ಬಂದಿಗಳ ಕಾರ್ಯ ಹಂಚಿಕೆ ವಿವರಗಳು

| ಕ್ರ.ಸಂ. | ಹುದ್ದೆಗಳ ವಿವರ | ಕಾರ್ಯ ಹಂಚಿಕೆ |
|---|---|---|
| 1 | ವಸತಿ ಶಾಲೆಯ/ಕಾಲೇಜಿನ ಪ್ರಾಂಶುಪಾಲರು | ವಸತಿ ಶಾಲೆ /ಕಾಲೇಜಿನ ಮುಖ್ಯಸ್ಥರಾಗಿ ಆರ್ಥಿಕ ಮತ್ತು ಆಡಳಿತಾತ್ಮಕ ಹಾಗೂ ಶೈಕ್ಷಣಿಕ ಹೊಣೆಗಾರಿಕೆ ನಿರ್ವಹಣೆ, .ವಸತಿ ಶಾಲೆಯಲ್ಲಿ ಗುಣಮಟ್ಟದ ಶಿಕ್ಷಣ ಹಾಗೂ ವಸತಿನಿಲಯದಲ್ಲಿ ಉತ್ತಮ ಗುಣಮಟ್ಟದ ಆಹಾರ ಪೂರೈಕೆ ಹಾಗೂ ಇತರ ಸೌಕರ್ಯಗಳ ನೀಡಿಕೆಯ ಸಂಪೂರ್ಣ ಜವಾಬ್ದಾರಿ ಇವರದ್ದಾಗಿರುತ್ತದೆ. ಒಟ್ಟಾರೆಯಾಗಿ ಪ್ರಾಂಶುಪಾಲರು ವಸತಿ ಶಾಲೆಯ ನಾಯಕ, ಮಾರ್ಗದರ್ಶಕ ಹಾಗೂ ಶಿಕ್ಷಣದ ಪ್ರಗತಿಯ ಸಂಪೂರ್ಣ ಜವಾಬ್ದಾರಿಯ ನಿರ್ವಹಣೆ .<br>ಮೇಲಾಧಿಕಾರಿಗಳು ಕಾಲಕಾಲಕ್ಕೆ ಸೂಚಿಸುವ ಇನ್ನಿತರ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸುವುದು |
| 2 | ಉಪನ್ಯಾಸಕರು/ಸಹ ಶಿಕ್ಷಕರು | ಬೋಧನೆ ಹಾಗೂ ಕಲಿಕಾ ಪ್ರಕ್ರಿಯೆಯಲ್ಲಿ ನಿರಂತರ ಮತ್ತು ವ್ಯಾಪಕ ಮೌಲ್ಯಮಾಪನ ವಿಧಾನಗಳನ್ನು ಅನುಸರಿಸುವುದರೊಂದಿಗೆ ಕಾಲಕಾಲಕ್ಕೆ ಬದಲಾದ ಪದ್ಧತಿಗಳಿಗನುಗುಣವಾದ ವಿಧಾನಗಳನ್ನು ಅಳವಡಿಸಿಕೊಂಡು ವಿದ್ಯಾರ್ಥಿಗಳು ಗುಣಾತ್ಮಕ ಫಲಿತಾಂಶ ಹೊಂದುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುವುದು. ಮೇಲಾಧಿಕಾರಿಗಳು ಹಾಗೂ ಪ್ರಾಂಶುಪಾಲರು ಸೂಚಿಸುವ ಇನ್ನಿತರ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸುವುದು |
| 3 | ಗಣಕಯಂತ್ರ ಶಿಕ್ಷಕರು | 1. ಎಲ್ಲಾ ತರಗತಿಗಳಿಗೆ ಗಣಕಯಂತ್ರ ವಿಷಯದ ಬೋಧನೆ ಹಾಗೂ ಸಂಬಂಧಿಸಿದ ದಾಖಲಾತಿಗಳ ನಿರ್ವಹಣೆ ಮಾಡುವುದು.<br>2. ವಿದ್ಯಾರ್ಥಿಗಳಿಗೆ ಕಂಪ್ಯೂಟರ್ ವಿಷಯದ ಪ್ರಾಯೋಗಿಕ ಅಭ್ಯಾಸ ಮಾಡಿಸುವುದು ಹಾಗೂ ಕಂಪ್ಯೂಟರ್ ಸಲಕರಣೆಗಳ ವ್ಯವಸ್ಥಿತ ನಿರ್ವಹಣೆ ಮಾಡುವುದು.<br>3. ಪ್ರಸ್ತುತ ದಿನಮಾನಗಳಲ್ಲಿ ಅವಶ್ಯಕವೆನಿಸಿರುವ ಅಂತರ್ಜಾಲ ಬಳಕೆಯ ಜ್ಞಾನವನ್ನು ವಿದ್ಯಾರ್ಥಿಗಳಲ್ಲಿ ಮೂಡಿಸುವುದು.<br>4 ಶಿಕ್ಷಕರ ಪಾಠ ಬೋಧನೆಯಲ್ಲಿ ಕಂಪ್ಯೂಟರ್, ಸಿ.ಡಿ, ಪ್ರೊಜೆಕ್ಟರ್, ಅಂತರ್ಜಾಲ ಬಳಕೆಗೆ ಸಹಕಾರ ನೀಡುವುದು. |
| 4 | ದೈಹಿಕ ಶಿಕ್ಷಣ ಶಿಕ್ಷಕರು | 1. ವಸತಿ ಶಾಲೆಯ ದೈನಂದಿನ ಚಟುವಟಿಕೆಗಳ ವೇಳಾಪಟ್ಟಿಯನ್ನು ಸಮರ್ಪಕವಾಗಿ ಹಾಗೂ ವ್ಯವಸ್ಥಿತವಾಗಿ ಅನುಷ್ಠಾನಗೊಳಿಸುವುದು.<br>2. ವೇಳಾಪಟ್ಟಿಯಂತೆ ಬೆಳಿಗ್ಗೆ ವಿದ್ಯಾರ್ಥಿಗಳನ್ನು ಕಡ್ಡಾಯವಾಗಿ ಎಚ್ಚರಗೊಳಿಸಿ ನಿಗದಿತ ಸಮಯದಲ್ಲಿ ದೈಹಿಕ ವ್ಯಾಯಾಮ, ಯೋಗ, ಪ್ರಾರ್ಥನೆ ಇತ್ಯಾದಿಗಳನ್ನು ಮಾಡಿಸುವುದು.<br>3.ವೇಳಾಪಟ್ಟಿ ಅನುಸಾರ ವಸತಿ ನಿಲಯದ ಪ್ರಾರ್ಥನೆ, ಉಪಹಾರ, ಊಟ ಇತ್ಯಾದಿ ದೈನಂದಿನ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳು ಶಿಸ್ತಿನಿಂದ ಭಾಗವಹಿಸುವಂತೆ ಕಡ್ಡಾಯವಾಗಿ ಮೇಲ್ವಿಚಾರಣೆ ಮಾಡುವುದು.<br>4. ವಿದ್ಯಾರ್ಥಿಗಳನ್ನು ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯಮಟ್ಟದ ಕ್ರೀಡಾ ಸ್ಪರ್ಧೆಗಳಲ್ಲಿ ಭಾಗವಹಿಸುವಂತೆ ಮಾಡುವುದು ಮತ್ತು ಅಂತರ್ ವಸತಿ ಶಾಲಾ ಕ್ರೀಡಾಸ್ಪರ್ಧೆಗಳನ್ನು ಸಂಘಟಿಸುವುದು.<br>5. ಪ್ರತಿದಿನ ವಿದ್ಯಾರ್ಥಿಗಳ ವೈಯಕ್ತಿಕ ಶುಚಿತ್ವ, ಸಮವಸ್ತ್ರ ಮತ್ತು ದೈಹಿಕ ಆರೋಗ್ಯದ ಮೇಲೆ ನಿಗಾವಹಿಸಿ ಮೇಲ್ವಿಚಾರಣೆ ಮಾಡುವುದು |
| 5 | ಪದವಿ ಪೂರ್ವ ವಸತಿ ಶಾಲೆ/ಕಾಲೇಜಿನ ನಿಲಯಪಾಲಕರು | ನಿಲಯಪಾಲಕರು ಪ್ರಾಂಶುಪಾಲರ ಮೇಲುಸ್ತುವಾರಿಗೆ ಒಳಪಟ್ಟು ಕಾರ್ಯನಿರ್ವಹಿಸತಕ್ಕದ್ದು. ಹಾಸ್ಟೆಲ್ ವಿದ್ಯಾರ್ಥಿಗಳ ಯೋಗಕ್ಷೇಮ, ಊಟ, ವಸತಿ ಆರೋಗ್ಯದ ಬಗ್ಗೆ ಸಂಪೂರ್ಣವಾಗಿ ನಿಲಯಪಾಲಕರು ಜವಾಬ್ದಾರರಾಗಿರುತ್ತಾರೆ. |
| 6 | ಸಂಗೀತ ಶಿಕ್ಷಕರು | 1. ಎಲ್ಲಾ ತರಗತಿಗಳಿಗೂ ಸಂಗೀತ ವಿಷಯದ ಬೋಧನೆ ಹಾಗೂ ಸಂಬಂಧಿಸಿದ ದಾಖಲಾತಿಗಳ ನಿರ್ವಹಣೆ ಮಾಡುವುದು.<br>2. ವಿದ್ಯಾರ್ಥಿಗಳಿಗೆ ಸಂಗೀತ ಪರಿಕರಗಳ ಪ್ರಾಯೋಗಿಕ ಅಭ್ಯಾಸ ಮಾಡಿಸುವುದು ಹಾಗೂ ಸಂಗೀತ ಸಲಕರಣೆಗಳ ವ್ಯವಸ್ಥಿತ ನಿರ್ವಹಣೆ ಜವಾಬ್ದಾರಿಯನ್ನು ವಹಿಸಿಕೊಳ್ಳುವುದು.<br>3. ಪ್ರತಿಭಾ ಕಾರಂಜಿ ಕಾರ್ಯಕ್ರಮದ ಮೇಲುಸ್ತುವಾರಿ ಹಾಗೂ ಶಾಲಾ ಸಾಂಸ್ಕೃತಿಕ/ಸಹಪಠ್ಯ ಚಟುಟಿಕೆಗಳ ನಿರ್ವಹಣೆ ಮಾಡುವುದು. |
| 7 | ಪ್ರ.ದ.ಸ. ಕಂ ಕಂಪ್ಯೂಟರ್ ಆಪರೇಟರ್ಸ್ | ವಸತಿ ಶಾಲೆಗೆ ಸಂಬಂಧಿಸಿದ ಬಿಲ್ಲುಗಳನ್ನು ತಯಾರಿಸುವುದು, ಸಂಪೂರ್ಣ ದಾಖಲೆಗಳ ನಿರ್ವಹಣೆ ಹಾಗೂ ಸಂರಕ್ಷಣೆಯ ಪೂರ್ಣ ಜವಾಬ್ದಾರಿ ವಹಿಸುವುದು ಮತ್ತು ವಿವಿಧ ಕಡತಗಳ ನಿರ್ವಹಣೆ ಮಾಡತಕ್ಕದ್ದು. |
| 8 | ದ್ವಿ.ದ.ಸ. | |

| ಕ್ರ.ಸಂ. | ಹುದ್ದೆಗಳ ವಿವರ | ಕಾರ್ಯ ಹಂಚಿಕೆ |
|---|---|---|
| 9 | ಶುಶ್ರೂಷಕರು | 1. ಪ್ರತಿ ನಿತ್ಯ ಬೆಳಿಗ್ಗೆ ಹಾಗೂ ಸಾಯಂಕಾಲ ವಸತಿ ನಿಲಯಗಳಿಗೆ ಭೇಟಿ ನೀಡಿ "ಭೇಟಿ ವಹಿ" ಯಲ್ಲಿ ನಮೂದಿಸಿ ಎಲ್ಲ ವಿದ್ಯಾರ್ಥಿ/ನಿಯರ ಆರೋಗ್ಯ, ಯೋಗಕ್ಷೇಮ ವಿಚಾರಿಸುವುದು ಹಾಗೂ ಅನಾರೋಗ್ಯ ಇರುವ ವಿದ್ಯಾರ್ಥಿಗಳಿಗೆ ಚಿಕಿತ್ಸೆ ನೀಡಿ ಅವರ ಆರೋಗ್ಯದ ಬಗ್ಗೆ ನಿಗಾವಹಿಸಿ ತತ್ಸಂಬಂಧಿ ದಾಖಲೆಗಳನ್ನು ನಿರ್ವಹಿಸುವುದು ಅವುಗಳನ್ನು ವಾರಕ್ಕೊಮ್ಮೆ ಪ್ರಾಂಶುಪಾಲರಿಂದ ಪರಿಶೀಲನೆ ಮಾಡಿಸಿ ಸಹಿ ಪಡೆಯುವುದು.<br>2. ಉಪಹಾರ ಮತ್ತು ಊಟದ ಸಮಯಕ್ಕೆ ಭೋಜನಾಲಯದಲ್ಲಿ ಕಡ್ಡಾಯವಾಗಿ ಹಾಜರಿದ್ದು ಮಕ್ಕಳೊಂದಿಗೆ ಊಟದ ರುಚಿಯನ್ನು ಪರಿಶೀಲಿಸುವುದು.<br>3. ಪ್ರಥಮ ಚಿಕಿತ್ಸೆ ಪೆಟ್ಟಿಗೆ ಹಾಗೂ ಅಗತ್ಯ ಔಷಧೋಪಚಾರ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡು ತುರ್ತು ಸಂದರ್ಭದಲ್ಲಿ ಪ್ರಥಮ ಚಿಕಿತ್ಸೆ ನೀಡುವುದು. |
| 10 | ಅಡುಗೆಯವರು | ಅಡುಗೆಯವರು ವಿದ್ಯಾರ್ಥಿಗಳಿಗೆ ಶುಚಿ-ರುಚಿಯಾದ ಆಹಾರ ತಯಾರಿಕೆಯಲ್ಲಿ ತೊಡಗಿಸಲಾಗುವುದು |
| 11 | ಅಡುಗೆ ಸಹಾಯಕರು | ಅಡುಗೆಯವರ ಜೊತೆ ಸಹಾಯಕರಾಗಿ ಅಡುಗೆಯ ತಯಾರಿಕೆಯಲ್ಲಿ ನೆರವಾಗುವುದು ಹಾಗೂ ವಿದ್ಯಾರ್ಥಿಗಳಿಗೆ ಊಟ ಬಡಿಸಿ. ಸ್ವಚ್ಛತಾ ಕಾರ್ಯಗಳಲ್ಲಿ ತೊಡಗಿಸುವುದು. |
| 12 | ಕಾವಲುಗಾರರು | ವಸತಿ ಶಾಲೆಯ ಸಂಪೂರ್ಣ ಆಸ್ತಿಗಳನ್ನು ಮತ್ತು ವಿದ್ಯಾರ್ಥಿಗಳ ಸುರಕ್ಷತೆಗೆ ತೊಡಗಿಸಿಕೊಳ್ಳುವುದು ಹಾಗೂ ಹಿರಿಯ ಬೋಧಕ ಸಿಬ್ಬಂದಿರವರ ತಿಳಿಸಿದ ವಸತಿ ಶಾಲೆಗೆ ಸಂಬಂದಿಸಿದ ಕರ್ತವ್ಯಗಳನ್ನು ನಿರ್ವಹಿಸುವುದು. ಮೇಲಾಧಿಕಾರಿಗಳು ಹಾಗೂ ಪ್ರಾಂಶುಪಾಲರು ಸೂಚಿಸುವ ಇನ್ನಿತರ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸುವುದು. |
| 13 | ಸ್ವಚ್ಛತಾ ಸಿಬ್ಬಂದಿಗಳು | ವಸತಿ ಶಾಲೆಗಳ ಸ್ವಚ್ಚತಾ ಮತ್ತು ವಸತಿಯ ಸುತ್ತಮುತ್ತಲಿನ ಆವರಣ, ಬಯಲನ್ನು ಹಾಗೂ ಶೌಚಾಲಯ ಮತ್ತು ಸ್ನಾನದ ಗೃಹಗಳ ಸ್ವಚ್ಛತೆ, ಹಾಗೂ ವಿದ್ಯಾರ್ಥಿಗಳ ಕೊಠಡಿಗಳ ಸ್ವಚ್ಛತೆಗೆ ತೊಡಗಿಸುವುದು.ಮೇಲಾಧಿಕಾರಿಗಳು ಹಾಗೂ ಪ್ರಾಂಶುಪಾಲರು ಸೂಚಿಸುವ ಇನ್ನಿತರ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸುವುದು. |
| 14 | ಗ್ರೂಪ್-ಡಿ | ಹಿರಿಯ ಅದಿಕಾರಿಗಳ ಕಛೇರಿ ಕೆಲಸಗಳ ನಿರ್ವಹಣೆಗೆ ಅಗತ್ಯವಾಗಿದ್ದು, ಹುದ್ದೆಗಳನ್ನು ಪ್ರಸ್ತಾಪಿಸಿದೆ. |